# ಕರ್ನಾಟಕ ವಿಧಾನ ಪರಿಷತ್ತು

1] ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2098

2] ಮಾನ್ಯ ಸದಸ್ಯರ ಹೆಸರು : ಶ್ರೀ ದಿನೇಶ್ ಗೂಳಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

3] ಉತ್ತರಿಸುವ ದಿನಾಂಕ : 17.03.2022

4] ಉತ್ತರಿಸುವ ಸಚಿವರು : ಗೃಹ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಪೊಲೀಸ್ ಇಲಾಖೆಯ ಔರಾದ್ಕರ್ ವರದಿ ಪೂರ್ಣ ಪ್ರಮಾಣದಲ್ಲಿ ಜಾರಿಯಾಗಿದೆಯೇ; | ಶ್ರೀ ರಾಘವೇಂದ್ರ ಔರಾದ್ಕರ್ ವರದಿಯ ಶಿಫಾರಸ್ಸುಗಳನ್ನು ಭಾಗಶಃ ಅಂಗೀಕರಿಸಿರುವ ರಾಜ್ಯ ಸರ್ಕಾರವು ಅನುಯಾಯಿ, ಜಮೇದಾರ್ ಅನುಯಾಯಿ, ಪಿ.ಎಸ್.ಐ ಹಾಗೂ ಪೊಲೀಸ್ ಉಪಾಧೀಕ್ಷಕರುಗಳ ವೇತನ ಶ್ರೇಣಿಗಳನ್ನು ಹೊರತುಪಡಿಸಿ ಇತರೆ ಎಲ್ಲಾ ವೃಂದದ ಪೊಲೀಸ್ ಅಧಿಕಾರಿ ಮತ್ತು ಸಿಬ್ಬಂದಿಯವರುಗಳ ವೇತನ ಶ್ರೇಣಿಗಳನ್ನು ಪರಿಷ್ಕರಣೆ ಮಾಡಿರುತ್ತದೆ.<br><br>ಅಧಿಕಾರಿ ಮತ್ತು ಸಿಬ್ಬಂದಿಯವರುಗಳ ಭತ್ಯೆಗಳ ಪರಿಷ್ಕರಣೆಗೆ ಮಾಡಿದ್ದ ಶಿಫಾರಸ್ಸುಗಳಲ್ಲಿ ಗಂಡಾಂತರ ಭತ್ಯೆ, ಶ್ರಮದಾನ ಭತ್ಯೆ ಹಾಗೂ ಸದೃಢ ಭತ್ಯೆಗಳನ್ನು ಹೊರತುಪಡಿಸಿ, ಇತರೆ ಎಲ್ಲಾ ಭತ್ಯೆಗಳನ್ನು ಪರಿಷ್ಕರಣೆ ಮಾಡಲಾಗಿರುತ್ತದೆ. |
| ಆ. | ಹಾಗಿದ್ದಲ್ಲಿ, ಇದರಿಂದ ಎಷ್ಟು ಸಿಬ್ಬಂದಿಗಳಿಗೆ ಅನುಕೂಲವಾಗಿದೆ; (ವೃಂದವಾರು ವಿವರ ನೀಡುವುದು) | **ಅನುಬಂಧದಲ್ಲಿ ಉತ್ತರಿಸಲಾಗಿದೆ.** |
| ಇ. | ಈ ವರದಿಯಿಂದ ಎಷ್ಟು ಪೊಲೀಸ್ ಅಧಿಕಾರಿಗಳು ಮುಂಬಡ್ತಿಯಿಂದ ವಂಚಿತರಾಗಿದ್ದಾರೆ? (ವಿವರ ಒದಗಿಸುವುದು) | ಶ್ರೀ ರಾಘವೇಂದ್ರ ಔರಾದ್ಕರ್ ಸಮಿತಿಯ ವರದಿಯು ಸಿಬ್ಬಂದಿಗಳ ವೇತನ ಮತ್ತು ಭತ್ಯೆಗಳಿಗೆ ಸಂಬಂಧಿಸಿದ್ದಾಗಿದ್ದು, ಈ ವರದಿಯಿಂದ ಪೊಲೀಸ್ ಅಧಿಕಾರಿ/ಸಿಬ್ಬಂದಿ ರವರುಗಳು ಮುಂಬಡ್ತಿಯಿಂದ ವಂಚಿತರಾಗಿರುವುದಿಲ್ಲ.<br><br>ಪೊಲೀಸ್ ಇಲಾಖೆಯಲ್ಲಿ ಕಾಲ-ಕಾಲಕ್ಕೆ ಉಂಟಾಗುವ ರಿಕ್ತವಾಗುವ ಹುದ್ದೆಗಳನ್ನು ಮುಂಚಿತವಾಗಿಯೇ ಪರಿಗಣನೆಗೆ ತೆಗೆದುಕೊಂಡು ಅರ್ಹ ಅಧಿಕಾರಿ/ಸಿಬ್ಬಂದಿಯವರುಗಳಿಗೆ ಪದೋನ್ನತಿ ನೀಡಲು ಈಗಾಗಲೇ ಕ್ರಮ ವಹಿಸಲಾಗುತ್ತಿದೆ. |

**ಸಂಖ್ಯೆ: ಹೆಚ್‌ಡಿ 33 ಇಎಫ್‌ಎಸ್ 2022**

[ಆರಗ ಜ್ಞಾನೇಂದ್ರ]
ಗೃಹ ಸಚಿವರು

# ಅನುಬಂಧ

## ಶ್ರೀ ರಾಘವೇಂದ್ರ ಔರಾದ್ಕರ್ ಸಮಿತಿ ವರದಿಯ ಅನುಷ್ಠಾನ ಜಾರಿಗಾಗಿ ಸರ್ಕಾರ ಕೈಗೊಂಡಿರುವ ಕ್ರಮಗಳ ಬಗ್ಗೆ ಸಂಕ್ಷಿಪ್ತ ಟಿಪ್ಪಣಿ

### ವೇತನ ಶ್ರೇಣಿ ಪರಿಷ್ಕರಣೆಯ ಅನುಷ್ಠಾನ:

ಶ್ರೀ ರಾಘವೇಂದ್ರ ಔರಾದ್ಕರ್ ವರದಿಯ ಶಿಫಾರಸ್ಸುಗಳನ್ನು ಭಾಗಶಃ ಅಂಗೀಕರಿಸಿದ ರಾಜ್ಯ ಸರ್ಕಾರವು ಅದೇಶ ಸಂಖ್ಯೆ: ಆಇ/9/ಎಸ್‌ಆರ್‌ಪಿ/2019, ದಿನಾಂಕ: 16.07.2019 ರಲ್ಲಿ ಪೊಲೀಸ್ ಇಲಾಖೆಯ ಅಧಿಕಾರಿ ಮತ್ತು ಸಿಬ್ಬಂದಿಯವರುಗಳ ವೇತನ ಶ್ರೇಣಿಗಳನ್ನು ದಿನಾಂಕ: 01.08.2019 ರಿಂದ ಜಾರಿಗೆ ಬರುವಂತೆ, ಈ ಕೆಳಕಂಡಂತೆ ಪರಿಷ್ಕರಣೆ ಮಾಡಿರುತ್ತದೆ.

| Sl. No. | Rank | Revised Pay Scale (As per 6th Pay Commission) ₹ | Raise in Levels | Total Policemen Benefited |
|---|---|---|---|---|
| 1 | Police Constable | 23,500-47,650 | One Level | 42757 |
| 2 | Head Constable | 27,650-52,650 | Two Level | 27111 |
| 3 | Asst. Sub Inspector | 30,350-58,250 | One Level | 9030 |
| 4 | Police Inspector | 43,100-83,900 | One Level | 1511 |
| 5 | SP (non-IPS) | 70,850-1,07,100 | One Level | 127 |
| | **TOTAL** | | | **80536** |

ಶ್ರೀ ರಾಘವೇಂದ್ರ ಔರಾದ್ಕರ್ ಸಮಿತಿ ವರದಿಯ ಅನುಷ್ಠಾನದಿಂದ ಅನುಯಾಯಿ, ಜಮೇದಾರ್ ಅನುಯಾಯಿ, ಪಿ.ಎಸ್.ಐ ಹಾಗೂ ಪೊಲೀಸ್ ಉಪಾಧೀಕ್ಷಕರುಗಳ ವೇತನ ಶ್ರೇಣಿ ಪರಿಷ್ಕರಣೆಗಳನ್ನು ಹೊರತುಪಡಿಸಿ ಇತರೆ ಎಲ್ಲಾ ವೃಂದದ ಪೊಲೀಸ್ ಅಧಿಕಾರಿ ಮತ್ತು ಸಿಬ್ಬಂದಿಯವರುಗಳ ವೇತನ ಶ್ರೇಣಿಗಳು ಪರಿಷ್ಕರಣೆಯಾಗಿ ಅನುಕೂಲವಾಗಿರುತ್ತವೆ.

### ಭತ್ಯೆ ಪರಿಷ್ಕರಣೆ ಅನುಷ್ಠಾನ:

ಶ್ರೀ ರಾಘವೇಂದ್ರ ಔರಾದ್ಕರ್ ಸಮಿತಿಯು ಪೊಲೀಸ್ ಇಲಾಖೆಯ ಅಧಿಕಾರಿ ಮತ್ತು ಸಿಬ್ಬಂದಿಯವರುಗಳ ಭತ್ಯೆಯನ್ನು ಪರಿಷ್ಕರಿಸುವಂತೆ ಮಾಡಿದ್ದ ಶಿಫಾರಸ್ಸುಗಳನ್ನು ಅಂಗೀಕರಿಸಿದ ಮಾನ್ಯ ಘನ ಸರ್ಕಾರವು, ಪೊಲೀಸ್ ಅಧಿಕಾರಿ ಮತ್ತು ಸಿಬ್ಬಂದಿಯವರುಗಳ ಭತ್ಯೆಗಳನ್ನು ಈ ಕೆಳಕಂಡಂತೆ ಪರಿಷ್ಕರಿಸಿರುತ್ತದೆ;

| ಕ್ರ. ಸಂ. | ಸರ್ಕಾರದ ಆದೇಶ ಸಂಖ್ಯೆ ಮತ್ತು ದಿನಾಂಕ: | ಭತ್ಯೆಗಳ ವಿವರ | ಭತ್ಯೆಯ ಮೊತ್ತ |
|---|---|---|---|
| 1 | ಎಫ್.ಡಿ 47 ಎಸ್‌ಆರ್‌ಪಿ 2016(1), ದಿನಾಂಕ: 21.11.2016 | ಸಮವಸ್ತ್ರ ಭತ್ಯೆ | 500.00 |
| 2 | ಎಫ್.ಡಿ 47 ಎಸ್‌ಆರ್‌ಪಿ 2016(11), ದಿನಾಂಕ: 21.11.2016 | ಸಾರಿಗೆ ಭತ್ಯೆ | 600.00 |

...2

| | | | |
|---|---|---|---|
| 3 | ಆದೇಶ ಸಂಖ್ಯೆ: ಆಇ 6 ಎಸ್‌ಆರ್‌ಪಿ 2019, ದಿನಾಂಕ: 18.10.2019 | ಕಷ್ಟ ಪರಿಹಾರ ಭತ್ಯೆ<br>ಅನುಯಾಯಿ<br>ಪಿ.ಸಿ<br>ಹೆಚ್.ಸಿ<br>ಎ.ಎಸ್.ಐ<br>ಪಿ.ಎಸ್.ಐ<br>ಪಿ.ಐ | <br>2000.00<br>3000.00<br>2000.00<br>2000.00<br>2000.00<br>1000.00 |

ಶ್ರೀ ರಾಘವೇಂದ್ರ ಔರಾದ್ಕರ್ ಸಮಿತಿಯು ಪೊಲೀಸ್ ಇಲಾಖೆಯ ಅಧಿಕಾರಿ ಮತ್ತು ಸಿಬ್ಬಂದಿಯವರುಗಳ ಭತ್ಯೆಗಳ ಪರಿಷ್ಕರಣೆಗೆ ಮಾಡಿದ್ದ ಶಿಫಾರಸ್ಸುಗಳಲ್ಲಿ ಗಂಡಾಂತರ ಭತ್ಯೆ, ಶ್ರಮದಾನ ಭತ್ಯೆ ಹಾಗೂ ಸದೃಢ ಭತ್ಯೆಗಳನ್ನು ಹೊರತುಪಡಿಸಿ, ಇತರೆ ಎಲ್ಲಾ ಭತ್ಯೆಗಳನ್ನು ಪರಿಷ್ಕರಣೆ ಮಾಡಲಾಗಿದೆ.

ಒಟ್ಟಾರೆಯಾಗಿ ಶ್ರೀ ರಾಘವೇಂದ್ರ ಔರಾದ್ಕರ್ ಸಮಿತಿಯ ಶಿಫಾರಸ್ಸುಗಳ ಅನುಷ್ಠಾನದಿಂದ ಪೊಲೀಸ್ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ 84773 ಅಧಿಕಾರಿ ಮತ್ತು ಸಿಬ್ಬಂದಿಯವರುಗಳಿಗೆ ಅನುಕೂಲವಾಗಿದೆ.

-----